# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 249
ಸದಸ್ಯರ ಹೆಸರು : ಶ್ರೀ ಎನ್.ರವಿಕುಮಾರ್
(ವಿಧಾನಸಭೆಯಿಂದ ಚುನಾಯಿತರಾದವರು)
ಉತ್ತರಿಸುವ ದಿನಾಂಕ : 04-03-2020
ಉತ್ತರಿಸುವ ಸಚಿವರು : ಕಂದಾಯ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರು ದಕ್ಷಿಣ ತಾಲ್ಲೂಕಿನ ಬೇಗೂರು ಹೋಬಳಿಯ ಹುಳಿಮಾವು ಗ್ರಾಮದ ಸರ್ವೆ ನಂ.63ರಲ್ಲಿ 5 ಎಕರೆ ಜಾಗವನ್ನು ಒತ್ತುವರಿ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಒತ್ತುವರಿ ಮಾಡಿರುವವರ ಹೆಸರು ಮತ್ತು ವಿಳಾಸವೇನು; | ಹೌದು.<br><br>ಇಸ್ಲಾಮಿಯ ಇನ್ಸ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿ, ನ್ಯಾಷನಲ್ ಪಾರ್ಕ್ ರಸ್ತೆ, ಬೆಂಗಳೂರು-560076 ಇವರು ಒತ್ತುವರಿ ಮಾಡಿಕೊಂಡಿರುತ್ತಾರೆ. |
| ಆ) | ಬೆಂಗಳೂರು ನಗರ ಜಿಲ್ಲೆಯ ಬೆಂಗಳೂರು ದಕ್ಷಿಣ ತಾಲ್ಲೂಕಿನ ಬೇಗೂರು ಹೋಬಳಿಯ ಹುಳಿಮಾವು ಗ್ರಾಮದ ಸರ್ವೆ ನಂ.63ರಲ್ಲಿ 5 ಎಕರೆ ಜಾಗವನ್ನು ಒತ್ತುವರಿ ಮಾಡಿರುವುದನ್ನು ತೆರವುಗೊಳಿಸಿದ ಬಗ್ಗೆ ಆದೇಶವಾಗಿದ್ದರೂ ಸರ್ಕಾರದ ವಶಕ್ಕೆ ಪಡೆಯದಿರಲು ಕಾರಣವೇನು; | ಬೆಂಗಳೂರು ದಕ್ಷಿಣ ತಾಲ್ಲೂಕು, ಬೇಗೂರು ಹೋಬಳಿ, ಹುಳಿಮಾವು ಗ್ರಾಮದ ಸರ್ವೆ ನಂ. 63ರಲ್ಲಿ 5-00 ಎಕರೆ ಜಾಗವನ್ನು ಒತ್ತುವರಿ ಮಾಡಿರುವುದನ್ನು ತಹಶೀಲ್ದಾರ್ ನ್ಯಾಯಾಲಯದ ಆದೇಶ ಸಂಖ್ಯೆ:ಎನ್‌ಸಿಆರ್/ಸಿಆರ್/08/09-10, ದಿನಾಂಕ:25.07.2009ರಂದು ತೆರವುಗೊಳಿಸಲು ಆದೇಶಿಸಲಾಗಿದ್ದು, ದಿನಾಂಕ:01/10/2016ರಂದು ಕಂದಾಯ ಅಧಿಕಾರಿಗಳ ಸಮಕ್ಷಮದಲ್ಲಿ ತೆರವುಗೊಳಿಸಿ, 'ಸರ್ಕಾರಿ ಸ್ವತ್ತು' ಎಂದು ನಾಮಫಲಕವನ್ನು ಅಳವಡಿಸಿ, ಸರ್ಕಾರದ ವಶಕ್ಕೆ ಪಡೆಯಲಾಗಿರುತ್ತದೆ. |
| ಇ) | ಅಕ್ರಮ ಒತ್ತುವರಿಗೆ ಸಹಕರಿಸಿ ಅನಧಿಕೃತ ಕಟ್ಟಡ ನಿರ್ಮಾಣವಾಗುವವರೆಗೆ ಸಹಕರಿಸಿದ ಅಧಿಕಾರಿಗಳನ್ನು ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಅಮಾನತ್ತುಗೊಳಿಸಿ ಶಿಕ್ಷೆಗೆ ಒಳಪಡಿಸಲಾಗಿದೆಯೇ; (ಹೆಸರು ಹುದ್ದೆಯೊಂದಿಗೆ ವಿವರ ನೀಡುವುದು) | ಪ್ರಸ್ತಾಪಿತ ಜಮೀನು ಇಸ್ಲಾಮಿಯ ಇನ್ಸ್‌ಟಿಟ್ಯೂಟ್ ಆಫ್ ಟೆಕ್ನಾಲಜಿ, ನ್ಯಾಷನಲ್ ಪಾರ್ಕ್ ರೋಡ್, ಬೆಂಗಳೂರು ರವರು ಅಕ್ರಮ ಒತ್ತುವರಿ ಮಾಡಲಾಗಿದ್ದು, ಇವರ ವಿರುದ್ಧ ಕರ್ನಾಟಕ ಭೂಕಂದಾಯ ಅಧಿನಿಯಮ 1964 ಕಲಂ 192(ಎ)ರಡಿ ಪ್ರಕರಣ ದಾಖಲಿಸಿಕೊಂಡು ವಿಚಾರಣೆ ನಡೆಸುವಂತೆ ಕರ್ನಾಟಕ ಭೂಕಬಳಿಕೆ ನಿಷೇಧ ವಿಶೇಷ ನ್ಯಾಯಾಲಯದಲ್ಲಿ ಎಲ್.ಜಿ.ಸಿ:245/2016ರಂತೆ ಪ್ರಕರಣ ದಾಖಲಿಸಲಾಗಿರುತ್ತದೆ. ಮಾನ್ಯ ನ್ಯಾಯಾಲಯವು ನೀಡುವ ತೀರ್ಪಿನಂತೆ ಕ್ರಮವಹಿಸಲಾಗುವುದು. |
| ಈ) | ಅಕ್ರಮ ಒತ್ತುವರಿದಾರರನ್ನು ತೆರವುಗೊಳಿಸುವ ಬಗ್ಗೆ ಸರ್ಕಾರದ ನಿಲುವೇನು; ಅಕ್ರಮ ಒತ್ತುವರಿದಾರರನ್ನು ತೆರವುಗೊಳಿಸಿ ಅಕ್ರಮ ಕಟ್ಟಡವನ್ನು ನೆಲಸಮಗೊಳೀಸಲಾಗುವುದೇ; ಈ ಅಕ್ರಮದಿಂದ ಕಾನೂನು ಸುವ್ಯವಸ್ಥೆಗೆ ತೊಂದರೆ ಉಂಟು ಮಾಡಿದವರ್‍ಯಾರು; ಒತ್ತುವರಿ ಜಾಗವನ್ನು ತೆರವುಗೊಳಿಸಿ ಜಾಗವನ್ನು ಸರ್ಕಾರದ ವಶಕ್ಕೆ ಪಡೆಯದ ಜಿಲ್ಲಾಧಿಕಾರಿಯವರ ಮೇಲೆ ಯಾವ ಕ್ರಮ ಕೈಗೊಳ್ಳಲಾಗಿದೆ; ಕ್ರಮ ಕೈಗೊಳ್ಳದಿರಲು ಕಾರಣವೇನು? | ಬೆಂಗಳೂರು ದಕ್ಷಿಣ ತಾಲ್ಲೂಕು, ಬೇಗೂರು ಹೋಬಳಿ, ಹುಳಿಮಾವು ಗ್ರಾಮದ ಸರ್ವೆ ನಂ. 63ರಲ್ಲಿ 5-00 ಎಕರೆ ಜಾಗವನ್ನು ಒತ್ತುವರಿ ಮಾಡಿರುವುದನ್ನು ತಹಶೀಲ್ದಾರ್ ನ್ಯಾಯಾಲಯದ ಆದೇಶ ಸಂಖ್ಯೆ:ಎನ್‌ಸಿಆರ್/ಸಿಆರ್/08/09-10, ದಿನಾಂಕ:25.07.2009ರಂದು ತೆರವುಗೊಳಿಸಲು ಆದೇಶಿಸಲಾಗಿದ್ದು, ಅದರಂತೆ ಸದರಿ ಒತ್ತುವರಿಯ ದಿನಾಂಕ:01.10.2016ರಂದು ತೆರವುಗೊಳಿಸಲಾಗಿರುತ್ತದೆ. |

**ಸಂಖ್ಯೆ: ಆರ್‌ಡಿ 05 ಎಲ್‌ಜಿಕ್ಯೂ 2020**

(ಆರ್.ಅಶೋಕ)
ಕಂದಾಯ ಸಚಿವರು